# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

'MUNJAVU' Kannada Weekly. KOPPA - CHM. ಫೋನ್:114

6ನೇ ವರ್ಷ 19ನೇ ಸಂಚಿಕೆ ಕೊಪ್ಪ 3-1-1987 ಭಾನುವಾರ ಬೆಲೆ 50 ಪೈಸೆ


## ಉತ್ತಮ ಸೇವೆ : ಪೋಲೀಸರಿಗೆ ಪ್ರಶಸ್ತಿ

ಕೊಪ್ಪ: 1987ರಲ್ಲಿ ಇಲಾಖೆಯಲ್ಲಿ ಉತ್ತಮ ಸೇವೆ ಸಲ್ಲಿಸಿದ್ದಕ್ಕಾಗಿ ಹರಿಹರಪುರ ಠಾಣೆಯ ಕ್ರೈಂ ವಿಭಾಗದ ಸಿಪಾಯಿ ಪಿ. ಜಿ. ತುಕ್ರಪ್ಪ, ಹೆಡ್ ಕಾನ್‌ಸ್ಟೆಬಲ್ ಮಂಜುನಾಥ್ ಮತ್ತು ಕೊಪ್ಪ ಸರ್ಕಲ್ ಇನ್‌ಸ್ಪೆಕ್ಟರ್ ವೈ. ಡಿ. ಕೇಶವಾನಂದ ಅವರುಗಳಿಗೆ ಡಿಜಿಪಿಯವರಿಂದ ಬಹುಮಾನ ದೊರೆತಿದೆ.

ಡಿ. 29 ರಂದು ಚಿಕ್ಕಮಗಳೂರಿನಲ್ಲಿ ಮಂಗಳೂರು ಡಿಐಜಿ ಅವರು ಡಿಜಿಪಿಯವರ ಪರವಾಗಿ ಈ ಬಹುಮಾನ ಗಳನ್ನು ವಿತರಿಸಿದರು. ಜಿಲ್ಲೆಯಲ್ಲಿ ಒಟ್ಟು ಇಬ್ಬರು ಸರ್ಕಲ್ ಇನ್‌ಸ್ಪೆಕ್ಟರ್, ಇಬ್ಬರು ಎಸ್ಸೈಗಳು, ಇಬ್ಬರು ಹೆಡ್ ಕಾನ್‌ಸ್ಟೇಬಲ್‌ಗಳು ಮತ್ತು 5 ಮಂದಿ ಕಾನ್‌ಸ್ಟೇಬಲ್‌ಗಳು ಈ ಬಹುಮಾನವನ್ನು ಪಡೆದಿದ್ದಾರೆ.

## ಯಶಸ್ವಿ 'ಪಶ್ಚಿಮ ಘಟ್ಟ ಉಳಿಸಿ' ಯಾತ್ರೆ

ಕನ್ಯಾಕುಮಾರಿಯಿಂದ ಹೊರಟು ಗೋವಾ ಕಡೆ ಮುಂದುವರಿಯುತ್ತಿರುವ 'ಪಶ್ಚಿಮ ಘಟ್ಟ ಉಳಿಸಿ' ಪಾದ ಯಾತ್ರಾ ತಂಡ ಡಿಸೆಂಬರ್ 27 ರಿಂದ 31 ರವರೆಗೆ ಶೃಂಗೇರಿಯ ಪ್ರದೇಶದಲ್ಲಿ ತನ್ನ ಸಂಚಾರ ವನ್ನು ಯಶಸ್ವಿಯಾಗಿ ಪೂರೈಸಿ ಶಿವಮೊಗ್ಗ ಜಿಲ್ಲೆಗೆ ಪ್ರಯಾಣ ಬೆಳೆಸಿತು.

ತನ್ನ ಪ್ರಯಾಣದುದ್ದಕ್ಕೂ ಸಂಸೆ, ಕುದ್ರೆಮುಖ, ಕಳಸ, ಬಾಳೆಹೊಳೆ, ಮಾಗುಂಡಿ, ಬಾಳೆಹೊನ್ನೂರು, ಸಿಆರ್‌ಎಸ್, ಹೇರೂರು, ಬಸರಿಕಟ್ಟೆ, ಬಿಳಾಲುಕೊಪ್ಪ, ಶೃಂಗೇರಿ, ಬೇಗಾರು ಮುಂತಾದ ಎಲ್ಲಾ ಕಡೆಗಳಲ್ಲೂ ಅಪಾರವಾಗಿ ಜನರನ್ನಾಕರ್ಷಿಸಿತು. ಮಾಗುಂಡಿ, ಕಳಸ ಮುಂತಾದ ಕಡೆಗಳಲ್ಲಂತೂ ಸಾವಿರ ಸಂಖ್ಯೆಯಲ್ಲಿ ಜನ ಸೇರಿ, ಜಾಥಾದ ಧ್ಯೇಯೋದ್ದೇಶಗಳನ್ನು ತಿಳಿದುಕೊಂಡರು.

### ಭದ್ರಾ ಮೇಲ್ದಂಡೆ ವಿರೋಧಿಸಿ ಸಾಂಕೇತಿಕ ಉಪವಾಸ

ಇದೇ ಸಂದರ್ಭದಲ್ಲಿ, ಮಾಗುಂಡಿಯಲ್ಲಿ ನಿರ್ಮಿಸಲು ಉದ್ದೇಶಿಸಲಾಗಿರುವ 'ಭದ್ರಾ ಮೇಲ್ದಂಡೆ ಯೋಜನೆ'ಯನ್ನು ವಿರೋಧಿಸಿ, ಕನ್ನಡ ಸಾಹಿತ್ಯ ಪರಿಷತ್ತಿನ ನ.ರಾ. ಪುರ ತಾ॥ ಪ್ರತಿನಿಧಿಯೂ, ಪ್ರಜ್ಞಾವಂತ ಪರಿಸರ ಕಾರ್ಯಕರ್ತರೂ ಆದ ಮೂಡುಬಾಗಿಲು ಶ್ರೀನಿವಾಸ ಮೂರ್ತಿಯವರು ಹನ್ನೊಂದು ಜನ ತಂಡದವರೊಂದಿಗೆ ಡಿ. 28-29ರಂದು 1 ದಿನದ ಸಾಂಕೇತಿಕ ಉಪವಾಸ ಸತ್ಯಾಗ್ರಹವನ್ನು ಮಾಗುಂಡಿಯಲ್ಲಿ ಕೈಗೊಂಡಿದ್ದರು. ಸ್ಥಳೀಯ ಸಂಘ-ಸಂಸ್ಥೆಗಳು, ಶಾಲಾ ವಿದ್ಯಾರ್ಥಿಗಳು ಈ ಸತ್ಯಾಗ್ರಹಕ್ಕೆ ಬೆಂಬಲ ನೀಡಿದರು. ಪಾದ ಯಾತ್ರಾ ತಂಡದವರು ಮಾಗುಂಡಿಗೆ ಆಗಮಿಸಿದಾಗ ಮೂರ್ತಿಯವರಿಗೆ ಹಣ್ಣಿನ ರಸ ನೀಡಿ ಅವರ ಸತ್ಯಾಗ್ರಹವನ್ನು ಮುಕ್ತಾಯಗೊಳಿಸಲಾಯಿತು.

### ಮಾಹಿತಿಗಳು

ಜಾಥಾದ ಸಾರ್ವಜನಿಕ ಕಾರ್ಯಕ್ರಮಗಳಲ್ಲಿ ಸುಮಾರು 3500 ಕಿ. ಮೀ ಉದ್ದಕ್ಕೆ ಹಬ್ಬಿರುವ ಪಶ್ಚಿಮ ಘಟ್ಟಗಳು ಇಂದು ತಲುಪಿರುವ ಸ್ಥಿತಿ, ಅರಣ್ಯವುಳಿಯುವಂತೆ ಮಾಡಲು ಜನತೆ ಕೈಗೊಳ್ಳಬಹುದಾದ ಸ್ವಯಂ-ಸಂಯಮದ ಕ್ರಮಗಳು, ಕೈಗಾರಿಕೆಗಳಿಗಾಗಿ ಮಲೆನಾಡನ್ನು ನೀಲಗಿರಿಮಯ ಮಾಡುತ್ತಿರುವ ಒಪ್ಪಂದಗಳು, 'ಸಿ ಅಂಡ್ ಡಿ', ಉರುವಲು ಮಿತವ್ಯಯದ "ಅಸ್ತ್ರ" ಮತ್ತಿತರ ಸುಧಾರಿತ ಒಲೆಗಳು, ಸಗಣಿ ಅನಿಲ ಘಟಕಗಳು— ಇವೇ ಮುಂತಾದ ವಿಚಾರಗಳ ಬಗ್ಗೆ ವ್ಯಾಪಕವಾದ ಮಾಹಿತಿ ನೀಡಲಾಯಿತು.

ಜೊತೆಗೆ ಪರಿಸರ ರಕ್ಷಣೆ ಕುರಿತ ಸಾಂಸ್ಕೃತಿಕ ಕಾರ್ಯಕ್ರಮಗಳು, ಶೃಂಗೇರಿ ಜೆಸಿಬಿಎಂ ಕಾಲೇಜು ಎನ್ನೆಸ್ಸೆಸ್ ತಂಡದವರಿಂದ ಹಾಡು, ಬೀದಿ ನಾಟಕ ಮುಂತಾದುವು, ಧರ್ಮಸ್ಥಳದ ಮಂಜುಶ್ರೀ ತಂಡದವರಿಂದ 'ವನಶ್ರೀ-ವನರಾಣಿ' ಎಂಬ ಪರಿಸರ ಕುರಿತ ಯಕ್ಷಗಾನ ಇತ್ಯಾದಿ ಕಾರ್ಯಕ್ರಮಗಳೂ ಇದ್ದವು. ಜೊತೆಗೆ ಅಲ್ಲಲ್ಲಿ ಅರಣ್ಯ ಅಧಿಕಾರಿಗಳೊಂದಿಗೆ ಚರ್ಚೆ, ಸ್ಥಳ ವೀಕ್ಷಣೆಗಳು ಇತ್ಯಾದಿ ಇದ್ದವು.

### ಸರಕಾರದ ವಿರುದ್ಧ ವಲ್ಲ

ಇಡೀ ರಾಷ್ಟ್ರ ಎದುರಿಸುತ್ತಿರುವ ಮತ್ತು ಅನುಭವಿಸುತ್ತಿರುವ ಆಯ ತಪ್ಪಿದ ಪ್ರಾಕೃತಿಕ ಸಮತೋಲನದ ಸಮಸ್ಯೆಗಳು, ಕಾರಣಗಳು ಮತ್ತದರ ನಿವಾರಣೋಪಾಯಗಳನ್ನು ಕುರಿತು ದೇಶದ ನೈಜ ಪ್ರಭುಗಳಾದ ಜನ ಸಾಮಾನ್ಯರೆಲ್ಲರ ಗಮನ ಸೆಳೆಯುವ ಉದ್ದೇಶದ ಈ ಪಾದಯಾತ್ರೆಯು ಕೇಂದ್ರ

(4ನೇ ಪುಟಕ್ಕೆ)

## ನ. ರಾ. ಪುರದಲ್ಲಿ ಯಶಸ್ವೀ 'ಜನತಾ ನ್ಯಾಯಾಲಯ'

ನ.ರಾ. ಪುರ : ನ್ಯಾಯಾಲಯಗಳ ಮುಂದಿರುವ ಪ್ರಕರಣಗಳ ಪೈಕಿ ರಾಜಿಯ ಮೂಲಕ ಇತ್ಯರ್ಥ ಸಾಧ್ಯವಿರುವ ಪ್ರಕರಣಗಳಲ್ಲಿ ಸಂಧಾನ ಏರ್ಪಡಿಸಲು ಕೇಂದ್ರ ಸರ್ಕಾರ ರೂಪಿಸಿರುವ 'ಜನತಾ ನ್ಯಾಯಾಲಯ' ಕಾರ್ಯಕ್ರಮವು ಇಲ್ಲಿನ ಉಚಿತ ಕಾನೂನು ನೆರವು ಸಮಿತಿ ಆಶ್ರಯದಲ್ಲಿ ಡಿ. 27 ರಂದು ಮಾಗ. ಚಂದ್ರಶೇಖರ್ ಅಧ್ಯಕ್ಷತೆಯಲ್ಲಿ ನಡೆಯಿತು. ಹಿರಿಯ ವಕೀಲರಾದ ಎಚ್. ಬೊಮ್ಮಪ್ಪ ಉದ್ಘಾಟಿಸಿದರು. ವೈ.ಎಂ. ಸೂರ್ಯನಾರಾಯಣ ರಾವ್ ಜನತಾ ನ್ಯಾಯಾಲಯದ ವಿವರಣೆ ನೀಡಿದರು. ಸಮಿತಿ ಕಾರ್ಯದರ್ಶಿ ಪಿ. ಆರ್. ಶ್ರೀನಿವಾಸ ಮೂರ್ತಿ ಸ್ವಾಗತಿಸಿ ವಂದಿಸಿದರು.

ಈ ಕಾರ್ಯಕ್ರಮಕ್ಕೆ 43 ಕ್ರಿಮಿನಲ್ ಮತ್ತು 24 ಸಿವಿಲ್ ಮೊಕದ್ದಮೆಗಳನ್ನು ಆಯ್ದುಕೊಳ್ಳಲಾಗಿತ್ತು. ತರೀಕೆರೆಯ ವಕೀಲರಾದ ಕೆ. ಆರ್. ಲಿಂಗಪ್ಪ, ಸಿ. ಎ. ಶ್ರೀನಿವಾಸ ಮೂರ್ತಿ ಸಂಧಾನಕಾರರಾಗಿದ್ದರು.

### 'ಮುಂಜಾವು' ಸಂಪಾದಕರ ಮೇಲಿನ ಹಲ್ಲೆ ಪ್ರಕರಣ

1986ರ ಫೆ. 20 ರಂದು ಕೊಪ್ಪ ಪೋಲೀಸು ಠಾಣೆಯ ಎದುರಿನ 'ಮುಂಜಾವು' ಸಂಪಾದಕರ ಮೇಲೆ ನಡೆದ ಹಲ್ಲೆಯ ಬಗ್ಗೆ ಹೂಡಲಾಗಿದ್ದ ಮೊಕದ್ದಮೆಗಳನ್ನೂ ಜನತಾ ನ್ಯಾಯಾಲಯ ಕೈಗೆತ್ತಿಕೊಂಡಿತು. (ಕೆ. ವಿ. ಮಂಜುನಾಥ ಶೆಟ್ಟಿ, ಶ್ರೀನ ಭಂಡಾರಿ, ಕೆ. ಕೃಷ್ಣ, ಡಿ. ಎಸ್ ವಿಶ್ವನಾಥ ಶೆಟ್ಟಿ ಮತ್ತು ಕಾಯಿ ನಾಗರಾಜ ಇವರುಗಳ ಪ್ರಚೋದನೆಯಿಂದ ಉಮೇಶ ಭಂಡಾರಿ ಮತ್ತು ಸತ್ಯನಾರಾಯಣ ಎಂಬವರು ಹಲ್ಲೆ ನಡೆಸಿದ್ದಾಗಿ ಮೊಕದ್ದಮೆಯಲ್ಲಿ ಆಪಾದಿಸಲಾಗಿತ್ತು.)

ಇಂಥ ಅಹಿತಕರ ಘಟನೆ ತನ್ನಿಂದಾಗಲಿ ತನ್ನ ಸ್ನೇಹಿತರಿಂದಾಗಲಿ ಇನ್ನು ಮುಂದೆ ನಡೆಯದಂತೆ ತಾವು ಭರವಸೆ ನೀಡುವುದಾಗಿ ಮಂಜುನಾಥ ಶೆಟ್ಟಿ ಸಂಧಾನಕಾರರೆದುರು ನೀಡಿದ ವಚನವನ್ನನುಸರಿಸಿ ಸಂಪಾದಕರು ರಾಜಿಗೆ ಸಮ್ಮತಿಸಿದ ಮೇರೆಗೆ, 'ಪ್ರಕರಣಗಳನ್ನು ಕೈಬಿಡುವಂತೆ ನ್ಯಾಯಾಲಯಕ್ಕೆ ಮನವಿ ಮಾಡಲು' ಎರಡೂ ಕಡೆಯವರು ಒಪ್ಪಿಕೊಂಡರು.

## ಕೊಪ್ಪ ತಾ॥ ಮಟ್ಟದ ವಾಲಿಬಾಲ್ ಟೂರ್ನಿ

ಕೊಪ್ಪ : ಈ ತಾಲ್ಲೂಕಿನ ತೆಂಗಿನಮನೆಯ 'ಲಕ್ಷ್ಮೀ ವಾಲಿಬಾಲ್ ಟೀಂ' ಆಶ್ರಯದಲ್ಲಿ ತಾ॥ ಮಟ್ಟದ ವಾಲಿಬಾಲ್ ಟೂರ್ನಿ ಬರುವ ಜನವರಿ 23 ಮತ್ತು 24 ರಂದು ನಡೆಯಲಿದೆ. ಇದರ ಉದ್ಘಾಟನೆ ಜ. 23 ರಂದು ಬೆಳಿಗ್ಗೆ 9 ಗಂಟೆಗೆ ನಡೆಯಲಿದೆ. ಸ್ಪರ್ಧಿ ತಂಡಗಳು ತಮ್ಮ ಪ್ರವೇಶಪತ್ರಗಳನ್ನು 20 ರೂ. ಪ್ರವೇಶ ಧನದೊಂದಿಗೆ ತಾ. 18-1-1988 ರೊಳಗಾಗಿ ಟೀಮಿನ ಅಧ್ಯಕ್ಷ ಎ. ಕೆ. ಗಣೇಶ್ ಅಥವಾ ಕಾರ್ಯದರ್ಶಿ ಎಂ. ಕೆ. ಮಹಮೂದ್, ಇವರಿಗೆ ತಲುಪಿಸಲು ಕೋರಲಾಗಿದೆ.

ವಿಳಾಸ : ತೆಂಗಿನಮನೆ, ಕಲ್ಕೆರೆ ಅಂಚೆ, ಕೊಪ್ಪ ತಾ. ಸ್ಪರ್ಧಿಗಳಿಗೆ ವಸತಿ ಒದಗಿಸಲಾಗುವುದು. ಊಟ-ತಿಂಡಿಗೆ "ಕ್ಯಾಂಟೀನ್" ವ್ಯವಸ್ಥೆ ಏರ್ಪಡಿಸಲಾಗುವುದು ಎಂದು ವ್ಯವಸ್ಥಾಪಕರು ತಿಳಿಸಿದ್ದಾರೆ.

## ಚೆಸ್ ಮತ್ತು ಕ್ರಿಕೆಟ್ ಪಂದ್ಯಾವಳಿ

ಕೊಪ್ಪ : ಇಲ್ಲಿನ ಮಾರುತಿ ಸ್ಪೋರ್ಟ್ಸ್ ಕ್ಲಬ್ ಜ. 9 ಮತ್ತು 10 ರಂದು ಕೊಪ್ಪ ಪಟ್ಟಣ ಮಟ್ಟದ ಚೆಸ್ ಪಂದ್ಯಾವಳಿ ಮತ್ತು ಜ. 11 ರಿಂದ 17 ವರ್ಷದ ಒಳಗಿನವರಿಗಾಗಿ ಟೆನಿಸ್ ಬಾಲ್ ಕ್ರಿಕೆಟ್ ಟೂರ್ನಿ ಏರ್ಪಡಿಸಿದೆ.

ಪ್ರವೇಶ ಧನ ಚೆಸ್ ಸ್ಪರ್ಧೆಗೆ ಪ್ರತೀ ಸ್ಪರ್ಧಿಗೆ ರೂ 10 (ಪ್ರಾಥಮಿಕ ಶಾಲೆಯವರೆಗಿನ ವಿದ್ಯಾರ್ಥಿಗಳಿಗೆ ಶೇ. 50 ರಿಯಾಯಿತಿ ಇದೆ.) ಮತ್ತು ಕ್ರಿಕೆಟ್ ಸ್ಪರ್ಧೆಗೆ-ಪ್ರತೀ ತಂಡಕ್ಕೆ ರೂ.20 ಇದ್ದು, ಪ್ರವೇಶ ಪತ್ರಗಳನ್ನು 8.1.88 ರೊಳಗಾಗಿ ಎಸ್. ಜಲಂಧರ್, ಕೇರಾಫ್ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ, ಕೊಪ್ಪ, ಈ ವಿಳಾಸಕ್ಕೆ ಕಳಿಸಲು ಕೋರಲಾಗಿದೆ.

# ಸಂಪರ್ಕ ಭಾಷೆ: ಸಂದೇಹಕ್ಕೊಂದು ಸ್ಪಷ್ಟನೆ

[ನಮ್ಮ ತಾ॥ 22-11-1987ರ ಸಂಚಿಕೆಯಲ್ಲಿ ಪ್ರಕಟವಾಗಿದ್ದ "ರಾಜ್ಯೋತ್ಸವ ಪ್ರಶಸ್ತಿ ಮತ್ತು ಶಿಕ್ಷಣ ಮಾಧ್ಯಮದ ಷರತ್ತು : ದೇವನೂರು ಮಹಾದೇವ ವಿವರಣೆ" ಎಂಬ ಲೇಖನದಲ್ಲಿ ರಾಷ್ಟ್ರೀಯ ಸಂಪರ್ಕ ಭಾಷೆಯ ಬಗ್ಗೆ ದೇವನೂರರು ಪ್ರಕಟಿಸಿದ ವಿಚಾರಗಳನ್ನು ಕುರಿತು 'ಮುಂಜಾವು' ಸಂಪಾದಕರು ವ್ಯಕ್ತಪಡಿಸಿದ ಕೆಲವು ಸಂದೇಹಗಳನ್ನೂ ಅದಕ್ಕೆ ದೇವನೂರರು ನೀಡಿರುವ ಸ್ಪಷ್ಟನೆಯನ್ನೂ ಕೆಳಗೆ ಕೊಟ್ಟಿದೆ.]

ಕನ್ನಡ ಶಿಕ್ಷಣ ಮಾಧ್ಯಮ ಮತ್ತು ಆಡಳಿತ ಭಾಷೆ ಆಗುವ ಬಗೆಗೆ ದೇವನೂರರ ವಿಚಾರಗಳು ಬಹಳ ಅರ್ಥಪೂರ್ಣವಾಗಿವೆ. ಅಷ್ಟು ವಿಶಾಲವಾಗಿ ಯೋಚಿಸುವುದು ಈ ದೇಶದ ರೋಗಗ್ರಸ್ತ ಮನಸ್ಸಿಗೆ ಇನ್ನೂ ಎಷ್ಟು ದೂರದ ಕನಸೋ ಏನೋ! ಆದರೆ ಅಂಥ ವಿಶಾಲ ಮನಸ್ಸಿನ ಚಿಂತನೆ-ಕಾರ್ಯಕ್ರಮದ ಹೊರತು ಈ ದೇಶಕ್ಕೆ ಅಖಂಡವಾಗಿ ಅಂತಿರಲಿ, ಛಿದ್ರವಾಗಿ ಕೂಡ-ನೆಮ್ಮದಿಯ ಬದುಕು ಅಸಾಧ್ಯ ಎಂಬುದು ನಿಜ.

ಆದರೆ ಸಂಪರ್ಕ ಭಾಷೆಯ ಬಗ್ಗೆ ಮಾತ್ರ ಇನ್ನಷ್ಟು ಯೋಚಿಸುವ ಅಗತ್ಯವಿದೆ ಎನ್ನಿಸುತ್ತದೆ. ಉರ್ದುವಿಗೆ ಒಳ್ಳೆಯ ಆಡಳಿತದ ಅನುಭವವಿರುವುದು ನಿಜ. ಹಾಗೆಯೇ ಅದು ಭಾರತದ ಎಲ್ಲ ರಾಜ್ಯಗಳಲ್ಲೂ ವ್ಯಾಪಿಸಿರುವ ಭಾಷೆಯಾದರೂ ಎಲ್ಲರೂ ಬಳಸುವ ಭಾಷೆ ಖಂಡಿತಾ ಅಲ್ಲವಷ್ಟೆ? ಉತ್ತರ ಭಾರತದ ಅಲ್ಪ ಸ್ವಲ್ಪ ಭಾಗ (ಮುಖ್ಯವಾಗಿ ಉತ್ತರ ಪ್ರದೇಶ) ಬಿಟ್ಟರೆ ಉಳಿದೆಲ್ಲ ಕಡೆ ಅದು ಕೇವಲ ತೀರಾ ಅಲ್ಪ ಸಂಖ್ಯಾತರು ಬಳಸುವ ಭಾಷೆ ಮಾತ್ರವೇ ಆಗಿದೆ. ಉಳಿದವರಿಗೆಲ್ಲ ಹಿಂದಿ ಹೇಗೆ ಹೊರತೋ, ಉರ್ದುವೂ ಅಷ್ಟೇ ಎನ್ನಬಹುದು. ('ಹಿಂದಿ ದೇಶೀಯ, ಉರ್ದು ಪರಕೀಯ' ಎಂಬ ಮಾಮೂಲಿ ಸಂಕುಚಿತ ಭಾವನೆ ಬಿಟ್ಟು ಯೋಚಿಸಿದಾಗ್ಯೂ.)

ಆದ್ದರಿಂದ ಉರ್ದುವಿಗೆ ದೇವನಾಗರಿ ಅಥವಾ ರೋಮನ್ ಲಿಪಿ ಬಳಸಿ 'ದೇಸೀ' ಆಗಿಸಿದರೂ ಕೂಡ, ಅದು ಸಂಪರ್ಕ ಭಾಷೆಯಾಗಬಲ್ಲುದೆ? ಎಂಬ ಬಗ್ಗೆ ನನಗೆ ಸಂದೇಹವಿದೆ.

ಈ ಬಗ್ಗೆ ದೇವನೂರರು ತಮ್ಮ ಆಲೋಚನೆಯ ಇನ್ನಷ್ಟು ವಿವರ ಹೊರಚೆಲ್ಲುವರೆಂದು ಆಶಿಸುತ್ತೇನೆ.

**ಸಿರಿಮನೆ ನಾಗರಾಜ್**, ಕೊಪ್ಪ
('ಸುದ್ದಿಸಂಗಾತಿ' ವಾರಪತ್ರಿಕೆಯಿಂದ)

## ದೇವನೂರರ ಉತ್ತರ

ಪ್ರಿಯ ನಾಗರಾಜ್.

ಉರ್ದು ಬಗ್ಗೆ :

1. ಹಿಂದಿ ಗ್ರಾಂಥಿಕ ಭಾಷೆ, ಹಿಂದೂಸ್ತಾನಿ ಆಡುಭಾಷೆ. ಉರ್ದು ಲಿಪಿ ಬದಲಾಯಿಸಿದರೆ ಅದು ಹಿಂದೂಸ್ತಾನಿಯೇ ಆಗುತ್ತದೆ.

2. ಹೆಚ್ಚೂ ಕಮ್ಮಿ ಇದನ್ನು ಗಾಂಧಿಯವರು ಸುಮಾರು 1930ರ ಸುತ್ತಮುತ್ತ ಪ್ರಚಾರ ಮಾಡಿದ್ದರು.

3. 'ಉರ್ದು'-ಅನ್ನುವುದರಿಂದ 'ಹಿಂದಿ ಹೇರಿಕೆ' ಎಂಬ ಪ್ರತಿಭಟನೆ ಸಿಲ್ಲುತ್ತದೆ.

4. ಉರ್ದು – ಮುಸ್ಲಿಮರ ಭಾಷೆ ಮಾತ್ರ ಅಲ್ಲ.

5. ಉರ್ದು ಅನ್ನುವುದರಿಂದ ಹಿಂದಿಯೂ ಅದರೊಳಗೆ ಸೇರಿಕೊಂಡು ಹೆಚ್ಚಿನ ವ್ಯಾಪ್ತಿ ಬರುತ್ತದೆ.

6. ಹಾಗೂ ಮುಸ್ಲಿಮರ ಭಾವನಾತ್ಮಕತೆಯನ್ನು ಸಾಂತ್ವನಗೊಳಿಸಿ, ಲಿಪಿ ತೆಗೆಯುವುದರಿಂದ ಅದೇ ಭಾವನಾತ್ಮಕತೆಯನ್ನು ಕಮ್ಮಿಗೊಳಿಸಿದಂತೂ ಏಕಕಾಲದಲ್ಲೇ ಆಗುತ್ತದೆ.

ನಿಮ್ಮ,
ದೇವನೂರು ಮಹಾದೇವ
ಕುವೆಂಪು ನಗರ, ಮೈಸೂರು-23

## ರಾಷ್ಟ್ರೀಯ ಕ್ರೀಡಾ ಕೂಟ: ಈಶನ್ ದಾಖಲೆ

ಕೇರಳದ ತಿರುವನಂತಪುರದಲ್ಲಿ ಕಳೆದ ವಾರ ನಡೆದ 2ನೇ ರಾಷ್ಟ್ರೀಯ ಕ್ರೀಡಾ ಕೂಟದಲ್ಲಿ ಕರ್ನಾಟಕದ ಎಸ್.ಡಿ. ಈಶನ್ ಹೊಸ ವಿಕ್ರಮ ಸಾಧಿಸಿದರು.

ಶಾಟ್‌ಪುಟ್‌ನಲ್ಲಿ ಗುಂಡನ್ನು 17.74 ಮೀ. ದೂರ ಎಸೆದ ಈಶನ್ ಕೂಟದ ಹೊಸ ದಾಖಲೆ ನಿರ್ಮಾಣದೊಂದಿಗೆ ಚಿನ್ನದ ಪದಕ ಪಡೆದರು. ಈ ಹಿಂದಿನ (ಪ್ರಥಮ) ಕ್ರೀಡಾ ಕೂಟದ ದಾಖಲೆ ಪಂಜಾಬಿನ ಜಸ್ಪಾಲ್ ಸಿಂಗ್ ಅವರದಾಗಿತ್ತು (17.50 ಮೀ.)

ಈ ಕೂಟದಲ್ಲಿ ರಜತ ಪದಕ ಪಡೆದ ಪಂಜಾಬಿನ ಬಹದ್ದೂರ್ ಸಿಂಗ್ ಈಶನ್‌ಗಿಂತ 1 40 ಮೀ. ಹಿಂದೆ ಉಳಿದರು. ಹರಿಯಾಣದ ಶಕ್ತಿ ಸಿಂಗ್ ಕಂಚಿನ ಪದಕ ಪಡೆದರು

17.74 ಮೀ.ನ ಈ ಎಸೆತ ಈಶನ್‌ರ ಈವರೆಗಿನ ಅತಿ ಹೆಚ್ಚಿನ ವೈಯಕ್ತಿಕ ಸಾಧನೆಯೂ ಆಗಿದೆ. ಈ ಹಿಂದಿನ ಅವರ ಅತ್ಯುತ್ತಮ ಸಾಧನೆಯೆಂದರೆ, ಕಳೆದ ಮೇ ತಿಂಗಳಲ್ಲಿ ಮಂಗಳೂರಲ್ಲಿ ನಡೆದ ರಾಷ್ಟ್ರೀಯ ಅಥ್ಲೆಟಿಕ್ಸ್‌ನಲ್ಲಿ ಅವರಿಗೆ ಬೆಳ್ಳಿ ಪದಕ ತಂದುಕೊಟ್ಟ 17.07 ಮೀ. ದೂರವಾಗಿದೆ.

ಇನ್ನು ಈಶನ್ ದೃಷ್ಟಿ ಮತ್ತು ಪ್ರಯತ್ನ ಅಥ್ಲೆಟಿಕ್ಸ್‌ನಲ್ಲಿ ರಾಷ್ಟ್ರೀಯ ದಾಖಲೆಯಾಗಿರುವ — ಬಹದ್ದೂರ್ ಸಿಂಗ್‌ರ— 18.56 ಮೀ. ದಾಖಲೆಯನ್ನು ಮುರಿಯುವುದು ಮತ್ತು ಮುಂದಿನ ವರ್ಷದ ಏಷ್ಯಾಡ್ ಸ್ಪರ್ಧೆಗಳಲ್ಲಿ ಭಾಗವಹಿಸಿ ಪದಕ ಗಳಿಸುವುದು ಆಗಿರುತ್ತದೆ. ತಮ್ಮ ಕ್ರೀಡಾ ಜೀವನದಲ್ಲಿ ಈಗ 2ನೇ ಬಾರಿಗೆ, ರಷ್ಯನ್ ಕೋಚ್ ಒಬ್ಬರಿಂದ ಶಿಕ್ಷಣ ತರಬೇತಿ ಪಡೆಯುತ್ತಿರುವ ಅವರ ಈ ಗುರಿ ಸಾಧನೆ ಯಶಸ್ವಿಯಾಗಿ ನೆರವೇರಲಿ ಎಂದು 'ಮುಂಜಾವು' ಹಾರೈಕೆ.

ಏಳಿ! ಎದ್ದೇಳಿ!!

ಓ.... ನನ್ನ ಭಾರತದ ಪ್ರಜೆಗಳೇ
ಏಳೀ, ಎದ್ದೇಳಿ
ಬಡತನವ ತುಳಿಯುವ ಶಕ್ತಿ ನಿಮ್ಮ
ಮುಂದಿದೆ
ಏಳೀ, ಎದ್ದೇಳಿ
ಬೆಲೆ ಏರಿಕೆ ಕಿತ್ತು ತಿನ್ನುತ್ತಿದೆ
ಏಳೀ, ಎದ್ದೇಳಿ
ಶ್ರೀಮಂತರ ಅಟ್ಟಹಾಸ ತೊಲಗಿಸಲು,
ಏಳೀ ಎದ್ದೇಳಿ
ಜಾತಿ ಮತ ಭೇದ ಭಾವ ತೊಡೆಯಲು,
ಏಳೀ ಎದ್ದೇಳಿ
ಅಣ್ಣ, ತಮ್ಮ, ಅಕ್ಕ, ತಂಗಿಯರಂತೆ
ಒಟ್ಟಾಗಿ ಬಾಳಲು
ಏಳೀ ಎದ್ದೇಳಿ
ನಮ್ಮ ನಮ್ಮಲ್ಲಿಯ ದ್ವೇಷ ಮರೆತು
ದೇಶದ ಹಿತ ಸಾಧನೆಗೆ
ಏಳೀ ಎದ್ದೇಳಿ
ನಾವೆಲ್ಲ "ಭಾರತೀಯರು" ಎಂಬ ಮಂತ್ರ
ಸಾರಲು
ಏಳೀ ಎದ್ದೇಳಿ
ಬೇಗಾಯಿತು, ನಿದ್ದೆಯಿಂದ
[illegible] ಎದ್ದೇಳಿ !

ಲಲಿತ ಟಿ. ಎಚ್.
8ನೇ ತರಗತಿ, ತೆಂಗಿನಮನೆ

## ಕುಡುಕನ ಎಡವಟ್ಟು

ಒಂದು ಊರಿನಲ್ಲಿ ಒಬ್ಬ ಹೆಂಡಕುಡುಕನಿದ್ದನು. ಒಂದು ದಿನ ಸಂಜೆ ಅವನು ತುಂಬಾ ಸಾರಾಯಿ ಕುಡಿದುಕೊಂಡು ಒಂದು ಗದ್ದೆಯ ಅಂಚಿನ ಮೇಲೆ ನಡೆದುಕೊಂಡು ಹೋಗುತ್ತಿದ್ದನು. ಎದುರಿನಿಂದ ಇನ್ನೊಬ್ಬ ಮನುಷ್ಯ ಅದೇ ಅಂಚಿನ ಮೇಲೆ ನಡೆದು ಬರುತ್ತಿದ್ದನು. 'ಅವನಿಗೆ ಕಲಿಸುತ್ತೇನೆ' ಎಂದುಕೊಂಡು ಕುಡುಕ ಅವನು ಹತ್ತಿರ ಬಂದ ಕೂಡಲೇ "ನಾನು ಮೂರ್ಖರಿಗೆ ದಾರಿ ಬಿಟ್ಟು ಕೊಡುವವನಲ್ಲ" ಎಂದನು.

ಎದುರಿನವ ಬುದ್ಧಿವಂತ. ಇವನ ಮಾತನ್ನು ಕೇಳಿ ನಕ್ಕು, "ನಾನು ಮಾತ್ರ ಮೂರ್ಖರಿಗೆ ಯಾವಾಗಲೂ ದಾರಿ ಬಿಟ್ಟು ಕೊಡುವವ" ಎನ್ನುತ್ತಾ, ಅಂಚಿನಿಂದ ಕೆಳಗಿಳಿದು ದಾರಿ ಬಿಟ್ಟು ಕೊಟ್ಟು ಮುಂದೆ ನಡೆದ. ಇವನು ಜಂಬದಿಂದ ಮುಂದೆ ಹೋದ.

ಹೋಗುತ್ತಾ ದಾರಿಯಲ್ಲಿ ಒಂದು ಮರಕ್ಕೆ ಡಿಕ್ಕಿ ಹೊಡೆದ. ಅದನ್ನು ಅಪ್ಪಿ ಹಿಡಿದು "ನೀನೇ ನನ್ನ ಗೆಳೆಯ" ಎನ್ನುತ್ತ ಅದರ ಕೊಂಬೆಯನ್ನು ಹಿಡಿದುಕೊಂಡ. ಅದನ್ನು ಕೈ ಬಿಟ್ಟ ಕೂಡಲೇ ಕೆಳಕ್ಕೆ ಬಿದ್ದ. "ಅಯ್ಯೋ ಗೆಳೆಯನೆ, ನೀನೂ ನನ್ನ ಕೈ ಬಿಟ್ಟೆಯಾ?" ಎನ್ನುತ್ತ ಎದ್ದು ಪುನಃ ಅದರ 'ಕೈ' ಹಿಡಿದುಕೊಂಡ. "ಇದಕ್ಕೇ ನೋಡು, ಒಗ್ಗಟ್ಟಿನಲ್ಲಿ ಬಲವಿದೆ ಎಂದು ಜನರು ಹೇಳುವುದು...." ಎಂದು ಹಲುಬುತ್ತ ಒಂದೆರಡು ಬಾರಿ ಬಿದ್ದು ಎದ್ದು ಮಾಡಿದ ಕೊನೆಗೊಮ್ಮೆ ತಲೆಗೆ ಏಟು ತಗುಲಿದಾಗ ಅಲ್ಲೇ ಚರಂಡಿಯಲ್ಲಿ ಬಿದ್ದುಕೊಂಡ.

ಬೆಳಗಾಗುವವರೆಗೂ ಅಲ್ಲೇ ಸುಖವಾದ ಗಾಢ ನಿದ್ರೆ ಅವನಿಗೆ!

—ಕೆ. ಬಿ ಶೆಣೈ, ಮಂಗಳೂರು

## ಕುವೆಂಪು-ಕವಿಶೈಲ

ಕುವೆಂಪು ಕುವೆಂಪು ಕುವೆಂಪು
ಕಥೆ ಬರೆಯುವರು ಕುವೆಂಪು
ಕವಿತೆ ಬರೆಯುವರು ಕುವೆಂಪು
ಓದಲು ಅದೆಲ್ಲ ಸವಿ-ಇಂಪು.
ಕುವೆಂಪು ಹುಟ್ಟಿದ್ದು ಒಂದಲ್ಲಿ
ಅದಕ್ಕೆ ಹೆಸರು ಕುಪ್ಪಳ್ಳಿ
ಸರ ಸರ ನಡೆದವು ನಾವೆಲ್ಲ
ಕಂಡೆವು ನಾವು "ಕವಿಶೈಲ"

**—ಟಿ. ಆರ್. ಸುರೇಶ್**
6ನೇ ತರಗತಿ, ಕೊಪ್ಪ

## ಇವು ನಿಮಗೆ ಗೊತ್ತೆ ?

1 ಜಗತ್ತಿನ ಅತಿ ಹೆಚ್ಚು ಜನಸಂಖ್ಯೆ ಇರುವ ನಗರ : ಜಪಾನಿನ ರಾಜಧಾನಿ ಟೋಕಿಯೋ

2. ಪ್ರಪಂಚದ ಅತಿ ಎತ್ತರವಾದ ಜಲಪಾತ : ಏಂಜೆಲ್ ಜಲಪಾತ

3. ಪ್ರಪಂಚದ ಅತಿ ಆಳವಾದ ಸಾಗರ ಪ್ರದೇಶ : ಮೆರಿಯಾನಾ ಕಾಲುವೆ-ಪೆಸಿಫಿಕ್ ಸಾಗರದಲ್ಲಿದೆ

4. ಪ್ರಪಂಚದ ಅತ್ಯಂತ ಎತ್ತರವಾದ ಮರಗಳು : ಕ್ಯಾಲಿಫೋರ್ನಿಯದಲ್ಲಿವೆ.

5. ಪ್ರಪಂಚದ ಅತಿ ಎತ್ತರ ಮರ ಯಾವುದು? ಅದು ಎಷ್ಟು ಎತ್ತರ ಇದೆ? ರೆಡ್‌ವುಡ್-380 ಅಡಿ ಎತ್ತರ ಇದೆ.

**ಬಿ. ಎಸ್. ರವೀಂದ್ರ**
8ನೇ ತರಗತಿ, ಬೇಡಗಾರು.

## 6.12.87ರ 'ಜಿನಾರಿಕೂಟ'ದ ಒಗಟುಗಳಿಗೆ ಉತ್ತರಗಳು

1. ಅಡಿಕೆ ಮರ, ಬೇರು, ಹೂ (ಹಿಂಗಾರ) ಮತ್ತು ಅಡಿಕೆ.

2 ಹಲ್ಲುಗಳು

3. ಈರುಳ್ಳಿ

(ಈ ಒಗಟುಗಳಿಗೆ ಎಲ್ಲ ಮಕ್ಕಳೂ ಸರಿಯುತ್ತರ ಬರೆದಿದ್ದಾರೆ. —ಸಂ.)

# ನ. ರಾ. ಪುರ ಸಾರ್ವಜನಿಕ ವಿದ್ಯಾರ್ಥಿನೀ ನಿಲಯದ ಲೋಪ ದೋಷಗಳು :

## ಪೋಷಕರೊಬ್ಬರ ದೂರು ಮತ್ತು ನ. ರಾ. ಪುರ ಬಿ. ಡಿ. ಓ. ಸ್ಪಷ್ಟನೆ

ಮಾನ್ಯರೆ,

ನರಸಿಂಹರಾಜಪುರದ ಸಾರ್ವಜನಿಕ ವಿದ್ಯಾರ್ಥಿನೀ ನಿಲಯದಲ್ಲಿ, ಇಪ್ಪತ್ತೆರಡು ಜನ ವಿದ್ಯಾರ್ಥಿನಿಯರು ಇದ್ದಾರೆ. ಇವರನ್ನು ನೋಡಿಕೊಳ್ಳಲು ಮೂಗಿಗಿಂತ ಮೂಗುತಿ ಭಾರ ಎಂಬತೆ ಐದು ಜನರ ಸಿಬ್ಬಂದಿ ವರ್ಗವಿದೆ. ಇಲ್ಲಿ ವಾರ್ಡನ್‌ಗೆ ಸಂಬಳ 300ರೂ. ಗಳಾದರೂ ಇದರ ನಾಲ್ಕು ಪಟ್ಟು ಗೋಲ್‌ಮಾಲ್ ಮಾಡಿ ಸಂಪಾದಿಸುತ್ತಾರೆ.

ಇಲ್ಲಿ ತಿಂಗಳಿಗೆ ಅಡುಗೆಗೆ ಒಂದೂವರೆ ಟನ್ ಕಟ್ಟಿಗೆಯನ್ನು ಕೊಳ್ಳಲಾಗುತ್ತೆ ಆದರೆ ಅಡಿಗೆಯವರ ಪ್ರಕಾರ ದಿನಕ್ಕೆ 8ರಿಂದ 10 ಕೆ. ಜಿ. ಮಾತ್ರ ಕಟ್ಟಿಗೆ ಕೊಡಲಾಗುತ್ತಿದೆ.

ದಿನವೂ 4.40ರೂ. ದರದಲ್ಲಿ 3ಕಿಲೋ ಉತ್ತಮ ತರಕಾರಿಯನ್ನು ಅಡುಗೆಗೆ ಕೊಡಲಾಗುವುದು ಎಂದು ತೋರಿಸುತ್ತಾರೆ ಆದರೆ ಅಡುಗೆಗೆ ಕೊಡುವುದು 2 ಕಿಲೋ ತರಕಾರಿ ಮಾತ್ರ. ಅದೂ ಒಳ್ಳೆಯ ತರಕಾರಿಯಲ್ಲ. 1ಕಿಲೋಗೆ ರೂ 3ರಿಂದ 4 ರೂ. ಒಳಗಾಗಿ ಖರೀದಿಸಲಾಗುತ್ತೆ. ದಿನಾ 250 ಗ್ರಾಂ ಎಣ್ಣೆಯನ್ನು ಅಡುಗೆಗಾಗಿ ಕೊಡಬೇಕಿದ್ದು ಕೇವಲ 150 ಗ್ರಾಂ ಎಣ್ಣೆಯನ್ನು ಮಾತ್ರ ಕೊಡಲಾಗುತ್ತೆ (ಪಾಮೋಲಿನ್ ಎಣ್ಣೆ)

ಸಾರಿಗೆ ಅರ್ಧ ಕಿಲೋ ಬೇಳೆ ಕೊಡಬೇಕೆಂದಿದೆ. ಆದರೆ ಅಡಿಗೆ ಮಾಡಲು ಕೊಡುವುದು 250 ಗ್ರಾಂ ಬೇಳೆ ಮಾತ್ರ. ಪ್ರತಿ ವಿದ್ಯಾರ್ಥಿನಿಗೆ ತಿಂಗಳಿಗೆ 2 ಮೊಟ್ಟೆಯನ್ನು ಕೊಡಬೇಕು. ಆದರೆ ಮಕ್ಕಳಿಗೆ ಈವರೆಗೂ ಒಂದು ಮೊಟ್ಟೆಯನ್ನೂ ಕೊಟ್ಟಿಲ್ಲ.

ವಿದ್ಯಾರ್ಥಿನಿಯರಿಗೆ ತಿಂಗಳಿಗೆ 1 ಲೈಫ್ ಬಾಯ್ ಸಾಬೂನು, 4 ಗೆರೆ ಉತ್ತಮ ಬಟ್ಟೆ ಸಾಬೂನು ಮತ್ತು 50 ಗ್ರಾಂ ಕೊಬ್ಬರಿ ಎಣ್ಣೆ ಕೊಡಬೇಕು. ಆದರೆ ಒಂದು ಮೈ ಸಾಬೂನನ್ನು ಎರಡು ಭಾಗ ಮಾಡಿ ತಲಾ ಒಂದು ತುಂಡನ್ನು ಮಕ್ಕಳಿಗೆ ಕೊಡುತ್ತಾರೆ. ಬಟ್ಟೆ ಸೋಪು ಕೂಡ ಕೆಲವು ವೇಳೆ ಖೋತಾ ಆಗುತ್ತೆ. ಎಣ್ಣೆ ಕೂಡಾ ಸರಿಯಾಗಿ ಕೊಡುತ್ತಿಲ್ಲ

ವಿದ್ಯಾರ್ಥಿನಿಯರಿಗೆ ತಲಾ ಅರ್ಧಕಿಲೋ ಅಕ್ಕಿಯಂತೆ, 22 ಜನಕ್ಕೆ 11 ಕಿಲೋ ಅಕ್ಕಿ ಕೊಡಬೇಕು. ಆದರೆ ಅಡುಗೆಯವರಿಗೆ ಕೊಡುವುದು 10 ಅಥವಾ 10½ ಕಿಲೋ ಅಕ್ಕಿ ಮಾತ್ರ. ರಜಾದಿನಗಳಲ್ಲಿ, ಕೆಲವು ಶನಿವಾರ ಸಂಜೆ ಮಕ್ಕಳು ಊರಿಗೆ ಹೋದರೆ ಸೋಮವಾರ ಬೆಳಗ್ಗೆ ಬರುತ್ತಾರೆ. ಆದರೆ ಆ ದಿನವೂ ಪೂರ್ತಿ ಮಕ್ಕಳಿಗೆ ಅಡುಗೆ ಮಾಡಿದಂತೆ ಖರ್ಚು ತೋರಿಸುತ್ತಾರೆ. ನಾನೇ ನೋಡಿದಾಗ 6.12.87ರಂದು 10 ಜನ ವಿದ್ಯಾರ್ಥಿನಿಯರು ಊರಿಗೆ ಹೋಗಿದ್ದರು. 13.12.87 ರಂದು 7 ಜನ ವಿದ್ಯಾರ್ಥಿನಿಯರು ಊರಿಗೆ ಹೋಗಿದ್ದರು.

ಈ ವರ್ಷದ ಗೌರಿ ಗಣೇಶನ ಹಬ್ಬದಲ್ಲಿ ಗುರುವಾರ, ಶುಕ್ರವಾರ, ಶನಿವಾರ, ಭಾನುವಾರ ಈ ರೀತಿ ನಾಲ್ಕು ದಿನ ಒಂದು ಮಕ್ಕಳೂ ಹಾಸ್ಟೆಲ್ಲಿನಲ್ಲಿ ಇರದೆ ಹಬ್ಬಕ್ಕಾಗಿ ಊರಿಗೆ ಹೋದವರು ಸೋಮವಾರ ಮರಳಿ ಬಂದರು. ಆದರೆ ಇವರ ಲೆಖ್ಖದಲ್ಲಿ ಈ ನಾಲ್ಕು ದಿನವೂ ಮಕ್ಕಳ ಹಾಜರಿ ಇದ್ದು, ಖರ್ಚು ಆಗಿರುತ್ತದೆ ಈ ಬಗ್ಗೆ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳು ವಾರ್ಡನ್‌ರನ್ನು ತರಾಟೆಗೆ ತೆಗೆದುಕೊಂಡಿದ್ದು, ಏನೇನೋ ಸಬೂಬು ಹೇಳಿ ಬಚಾವಾಗಿದ್ದಾರೆಂದು ತಿಳಿದು ಬಂದಿದೆ.

ಇವರ ಪ್ರಕಾರ ವಾರದ ಏಳು ದಿನಗಳಲ್ಲಿ ಚಪಾತಿ, ಚಿತ್ರಾನ್ನ, ಉಪ್ಪಿಟ್ಟು, ಅವಲಕ್ಕಿ, ವೆಜಿಟಬಲ್ ಪಲಾವ್, ಪುನಃ ಚಪಾತಿ ಮತ್ತು ಅವಲಕ್ಕಿ—ಈ ರೀತಿ ಕೊಡಬೇಕು. ಚಿತ್ರಾನ್ನ ಬಿಟ್ಟರೆ ಬೇರಾವ ತಿಂಡಿಯನ್ನೂ ಕೊಡುತ್ತಿಲ್ಲ. ವೆಜಿಟಬಲ್ ಪಲಾವ್ ಹೆಸರು ಕೇಳಿದ್ದಾರೆ ಹೊರತು ನೋಡಿ ಗೊತ್ತಿಲ್ಲ.

ವಿದ್ಯಾರ್ಥಿನಿಯರಿಗೆ ಯಾವುದೇ ರೀತಿಯ ಪೌಷ್ಟಿಕ ಆಹಾರ ಇಲ್ಲ; ಹಾಲು—ಮೊಸರು ಅಂತೂ ಕೇಳುವುದೇ ಬೇಡ.

ಇರುವ 22 ಜನ ವಿದ್ಯಾರ್ಥಿನಿಯರಿಗೆ 5 ಜನರ ಸಿಬ್ಬಂದಿ ಹೆಚ್ಚು ಇವರು ಕೆಲಸವಿಲ್ಲದೆ ಸೋಮಾರಿಗಳಾಗಿ ಹರಟೆ ಕೊಚ್ಚುತ್ತ, ಕೆಲವು ಬಾರಿ ಅಶ್ಲೀಲವಾಗಿ ರಸ್ತೆಗೆ ಕೇಳಿಸುವಂತೆ ಜಗಳವಾಡುತ್ತಾರೆ ಒಂದು ಬಾರಿ ವಾರ್ಡನ್ ಮತ್ತು ಕುಕ್ ಒಬ್ಬಳಿಗೆ ಗಲಾಟೆಯಾಗಿ ಸೀರೆಯನ್ನೆಲ್ಲಾ ಕಿತ್ತಾಡಿ ಪೋಲೀಸ್ ಠಾಣೆಗೆ ಹೋಗುವ ಮಟ್ಟಕ್ಕೆ ಬಂದಿತ್ತು.

ಇಂಥವರಿಂದ ನಾಳೆ ಬೆಳೆಯುವ ನಮ್ಮ ಹೆಣ್ಣು ಮಕ್ಕಳ ಮೇಲೆ ಏನು ಪರಿಣಾಮವಾಗಬಹುದ? ಈ ಬಗ್ಗೆ ವಿದ್ಯಾರ್ಥಿನಿಯರು ಯಾರೊಂದಿಗೂ ಏನೂ ಹೇಳುವಂತಿಲ್ಲ. ಹೊಡೆದು, ಹೆದರಿಸಿ ಇಟ್ಟಿದ್ದಾರೆ. ಹಳ್ಳಿಯಿಂದ ಬಂದ ಬಡ ರೈತ ಕುಟುಂಬದ ಮುಗ್ಧ ಹೆಣ್ಣು ಮಕ್ಕಳು ಹೆದರಿ ಮೂಲೆ ಸೇರಿದ್ದಾರೆ ವಿದ್ಯಾರ್ಥಿನೀ ನಿಲಯವೋ—ದನದ ದೊಡ್ಡಿ. ನೆಲವೆಲ್ಲಾ ಕಿತ್ತುಹೋಗಿದೆ. ಜಾಗ ಸಾಲದು.

ಇನ್ನಾದರೂ ಈ ರೀತಿಯ ಅವ್ಯವಹಾರಗಳು ನಿಲ್ಲಲಿ. ಇದಕ್ಕೆ ಸಂಬಂಧಪಟ್ಟವರು ಸೂಕ್ತ ಕ್ರಮ ಕೈಗೊಂಡು ನಮ್ಮ ದೇಶದ ಭಾವೀ ಜನಾಂಗವಾದ ಮಕ್ಕಳಿಗೆ ನ್ಯಾಯ ದೊರಕಿ ಉತ್ತಮ ಮುಕ್ತ ವಾತಾವರಣ ಸಿಗಲಿ ಎಂದು ಆಶಿಸುತ್ತೇನೆ.

—ಡಿ. ಕೆ. ಭಾಸ್ಕರ್,
ತಾ॥ ಯುವಜನ ಒಕ್ಕೂಟದ ಅಧ್ಯಕ್ಷರು,
ನರಸಿಂಹರಾಜಪುರ.

# ನ. ರಾ. ಪುರ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳ ಸ್ಪಷ್ಟನೆ

ಮಾನ್ಯರೆ,

ನರಸಿಂಹರಾಜಪುರ ಟೌನಿನಲ್ಲಿರುವ ಬಾಲಕಿಯರ ವಿದ್ಯಾರ್ಥಿನಿಲಯಕ್ಕೆ ಸಂಬಂಧಿಸಿದಂತೆ ಕೆಲವು ಆರೋಪಗಳ ಬಗ್ಗೆ ವಿವರಣೆಯನ್ನು ಹಾಗೂ ಇದರ ಬಗ್ಗೆ ತೆಗೆದುಕೊಂಡ ಕ್ರಮಗಳನ್ನು ಈ ಕೆಳಕಂಡಂತೆ ತಮ್ಮ ಗಮನಕ್ಕೆ ತರಬಯಸುತ್ತೇನೆ.

1. ನಿಲಯಕ್ಕೆ ಒಟ್ಟು 50 ಜನ ವಿದ್ಯಾರ್ಥಿನಿಯರಿಗೆ ಪ್ರವೇಶಾವಕಾಶವಿದೆ. ಸರ್ಕಾರದಿಂದ 50 ವಿದ್ಯಾರ್ಥಿನಿಯರಿಗಾಗಿ 2 ಅಡಿಗೆಯವರು, 1 ಅಡಿಗೆ ಸಹಾಯಕಿ, 1 ರಾತ್ರಿ ಕಾವಲುಗಾರ್ತಿಯನ್ನು ನೇಮಕ ಮಾಡಿರುತ್ತಾರೆ. ಆದರೆ ಈ ಸಾಲಿನಲ್ಲಿ ಕೇವಲ 22 ಜನ ವಿದ್ಯಾರ್ಥಿನಿಯರು ಮಾತ್ರ ಇದ್ದಾರೆ. ಕಾರಣ ಎಸ್. ಸಿ./ಎಸ್. ಟಿ. ವಿದ್ಯಾರ್ಥಿನಿಯರು ಸಾಕಷ್ಟು ಜನ ದಾಖಲಾಗಿಲ್ಲ. (37ರ ಸ್ಥಾನದಲ್ಲಿ 9 ಜನ ಮಾತ್ರ ಇದ್ದಾರೆ.) ಇದನ್ನು ಬೇರೆ ಜನಾಂಗದವರಿಗೆ ಕೊಡಲು ಬರುವುದಿಲ್ಲ. ಹೆಚ್ಚಿಗೆ ಸಿಬ್ಬಂದಿಯನ್ನು ಹಿಂದಕ್ಕೆ ತೆಗೆದುಕೊಳ್ಳಲು ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳವರಿಗೆ ಪತ್ರಿಸಲಾಗಿದೆ.

2. ಹಾಸ್ಟೆಲ್‌ಗೆ ಕಟ್ಟಿಗೆಯನ್ನು ತಿಂಗಳಿಗೆ 1 ಟನ್ ಮಾತ್ರ ತೆಗೆದುಕೊಂಡು ಅಡಿಗೆಗಾಗಿ ಮತ್ತು ವಿದ್ಯಾರ್ಥಿಗಳ ಸ್ನಾನಕ್ಕಾಗಿ ವಿತರಿಸಲಾಗುತ್ತಿದೆ. ಇನ್ನು ತರಕಾರಿ ದಿನಕ್ಕೆ 2ರಿಂದ 2½ ಕಿಲೋ ಮಾತ್ರ ಕೊಡಲಾಗುತ್ತಿದೆ. ಇದನ್ನು ಟಿ ಎ ಪಿ. ಸಿ. ಸೊಸೈಟಿ ಮುಖಾಂತರವೇ ಕೊಡುತ್ತಿದ್ದು 1 ಕೆ. ಜಿ.ಗೆ ರೂ. 4 50 ರಂತೆ ಬಿಲ್ಲು ಕೊಡುತ್ತಿದ್ದು ಇದರಲ್ಲಿ ಶೇ 20 ರಷ್ಟು ಸೊಸೈಟಿಯಲ್ಲಿ ಬಡ್ಡಿ ಸೇರಿಸಿ ಸೊಸೈಟಿಯವರು ಕೊಡಿಸುತ್ತಿದ್ದಾರೆ ಇದರಲ್ಲೂ ಕೆಲವು ಬಾರಿ ತರಕಾರಿ ರೇಟು ಜಾಸ್ತಿ ಇರುತ್ತದೆ. ಉದಾ: ಹಸಿಮೆಣಸು ರೂ 8ರಿಂದ 10ರ ವರೆಗೆ ಇರುತ್ತದೆ ಇನ್ನು ಪಾಮ್ ಎಣ್ಣೆ 200ಗ್ರಾಂ ಕೊಡುತ್ತಿದ್ದು ಬೇಳೆ ಕಾಳುಗಳನ್ನು ಸಹ 300 ಗ್ರಾಂ ಕೊಡುತ್ತಿದ್ದು ಇವೆಲ್ಲವನ್ನೂ ವಿದ್ಯಾರ್ಥಿನಿಯರ ಗ್ರೂಪ್ ಲೀಡರ್, ಅಡಿಗೆಯವರ ಸಮ್ಮುಖದಲ್ಲೇ ಕೊಡುವ ವ್ಯವಸ್ಥೆ ಮಾಡಲಾಗಿದೆ.

ಬೆಳಗ್ಗೆ ತಿಂಡಿಗೆ ಚಿತ್ರಾನ್ನ, ಉಪ್ಪಿಟ್ಟು, ಅವಲಕ್ಕಿ, ಚಪಾತಿಯನ್ನು ಕೊಡಲಾಗುತ್ತಿದೆ ವೆಜಿಟಬಲ್ ಪಲಾವ್ ಕೊಡಬೇಕೆಂದು ಟೈಮ್‌ಟೇಬಲ್‌ನಲ್ಲಿದ್ದರೂ, ಒಬ್ಬ ವಿದ್ಯಾರ್ಥಿನಿಗೆ ಆಹಾರಕ್ಕಾಗಿ ತಿಂಗಳಿಗೆ ರೂ. 100ರಂತೆ ದಿನಕ್ಕೆ ರೂ. 3.33 ಮಾತ್ರ ಖರ್ಚು ಮಾಡಬೇಕಾಗಿರುತ್ತೆ. ಹಾಸ್ಟೆಲ್‌ನಲ್ಲಿ ವಿದ್ಯಾರ್ಥಿನಿಯರು ಕಡಿಮೆ ಇರುವುದರಿಂದ ಮಿತಿಯಾದ ಖರ್ಚಿನಲ್ಲೇ ನಿರ್ವಹಿಸಬೇಕಾಗಿದೆ. ಇದರಿಂದಾಗಿಯೇ ಮೊಟ್ಟೆ ವಿತರಿಸಲು ಬರುವುದಿಲ್ಲ ಮತ್ತು ಕೊಳ್ಳುತ್ತಿಲ್ಲೂ ಇಲ್ಲ.

3. ಒಬ್ಬ ವಿದ್ಯಾರ್ಥಿನಿಗೆ ಸೋಪು, ಎಣ್ಣೆಗಾಗಿ ಒಂದು ತಿಂಗಳಿಗೆ ರೂ. 5 ಖರ್ಚು ಮಾಡಲು ಸರ್ಕಾರದ ಆದೇಶವಿದೆ ಒಂದು ಮೈಸೂರು ಕಾರ್ಬೋಲಿಕ್ ಸೋಪು (ಮೈಸೋಪು) ರೂ. 2 25 ಹಾಗೂ 4 ಗೀರು ಸೋಪು 2.40 ಆಗಿರುತ್ತದೆ. ಮಿಕ್ಕ ರೂ. 7 70ರಲ್ಲಿ ಮಕ್ಕಳಿಗೆ ಬೇಕಾಗುವ ವಸ್ತು ಕೊಡಲಾಗುತ್ತಿದೆ. ವಿದ್ಯಾರ್ಥಿನಿಯರಿಗೆ ಸ್ವಲ್ಪವೇ ಕೊಬ್ಬರಿ ಎಣ್ಣೆ ಕೊಟ್ಟರೆ ಉಪಯೋಗಕ್ಕೆ ಬರುವುದಿಲ್ಲವೆಂದು ಅವರೇ ತಿಳಿಸಿರುವುದರಿಂದ 1 ಮೈ ಸೋಪು 4 ಗೀರು ಬಟ್ಟೆಸೋಪು ನೀಡಿ ಪ್ರತಿಯೊಬ್ಬರಿಂದಲೂ ಸಹಿಪಡೆಯಲಾಗುತ್ತಿದೆ.

4. ಹಾಸ್ಟೆಲ್‌ನ ಸಿಬ್ಬಂದಿಯವರೆಲ್ಲಾ ಕೇಂದ್ರಸ್ಥಾನ ಬಿಡುವಾಗ ಕಛೇರಿಗೆ ರಜಾ ಪತ್ರಿಕೆಯೇ ಹೋಗುತ್ತಾರೆ

5. ಇನ್ನು, ಕೆಲವು ವಿದ್ಯಾರ್ಥಿನಿಯರು ಸ್ಥಳೀಯರಾಗಿದ್ದು ಶನಿವಾರ ಹಾಗೂ ಭಾನುವಾರದಂದು ಊಟಕ್ಕೆ ಸ್ವಂತ ಮನೆಗಳಿಗೆ ಹೋಗುತ್ತಿರುತ್ತಾರೆ. ಈ ರೀತಿ ಮನೆಗೆ ಹೋಗಿ ವಾರ್ಡನ್ ಖರ್ಚು ಹಾಕಿದ್ದಾಗ (ಗೌರಿ-ಗಣೇಶ ಹಬ್ಬ) ಯಾವ ಸಬೂಬನ್ನೂ ಕೇಳದೆ ವಾರ್ಡನ್‌ಗೆ 145 ರೂ. ದಂಡ ಹಾಕಿ ಸರ್ಕಾರಕ್ಕೆ ಜಮಾ ಮಾಡಿಸಲಾಗಿದೆ. ಯಾವುದೇ ವಿದ್ಯಾರ್ಥಿನಿಯರನ್ನು ಕಛೇರಿ ಅಪ್ಪಣೆ ಇಲ್ಲದೆ ಊರಿಗೆ ಅಥವಾ ಸ್ವಂತ ಮನೆಗಳಿಗೆ ಹೋಗಲು ಬಿಡುವುದಿಲ್ಲ ಎಂಬುದಾಗಿ ಆದೇಶಿಸಲಾಗಿದೆ.

ಕೊನೆಯದಾಗಿ, ಸದರಿ ಹಾಸ್ಟೆಲ್‌ನ ವಾರ್ಡನ್‌ರನ್ನು ಬೇರೆ ಹಾಸ್ಟೆಲ್‌ಗೆ ವರ್ಗಾವಣೆ ಮಾಡಿ ಬೇರೆ ಮೇಲ್ವಿಚಾರಕರನ್ನು ಇಲ್ಲಿಗೆ ವರ್ಗಾಯಿಸಲಾಗಿದೆ.

ವಿದ್ಯಾರ್ಥಿನಿಯರಿಗೆ ಪೌಷ್ಟಿಕ ಆಹಾರವಿಲ್ಲವೆಂದು ದೂರಿನಲ್ಲಿ ತಿಳಿಸಲಾಗಿದೆ. ತಿಂಗಳಿಗೆ ಕೇವಲ 100 ರೂ.ಗಳಲ್ಲಿ 2 ಊಟ ಮತ್ತು ಒಂದು ತಿಂಡಿ ಕೊಡಬೇಕಾಗಿದ್ದು ಈಗಿನ ಪೇಟೆ ದರದಂತೆ ಇಲಾಖಾ ಪಟ್ಟಿಯಲ್ಲಿ ನಮೂದಿಸಿರುವ ಎಲ್ಲಾ ಆಹಾರ ಪದಾರ್ಥಗಳನ್ನು ಕೊಡಲು ಅಸ್ಸಾಧ್ಯವಾಗಿರುತ್ತದೆ. ಇದನ್ನು ರೂ. 100 ರಿಂದ 150 ಕ್ಕೆ ಹೆಚ್ಚಿಸಲು ಇಲಾಖಾ ಮೀಟಿಂಗ್‌ನಲ್ಲಿ ತಿಳಿಸಲಾಗಿದೆ.

— ಕ್ಷೇತ್ರಾಭಿವೃದ್ಧಿ ಅಧಿಕಾರಿಗಳು
ನರಸಿಂಹರಾಜಪುರ

## ಪುರಂದರ, ತ್ಯಾಗರಾಜರ ಆರಾಧನಾ ಮಹೋತ್ಸವ

ಹರಿಹರಪುರ : ಇಲ್ಲಿಗೆ ಸಮೀಪದ [illegible] ರಳಿಯಲ್ಲಿ ಪ್ರತಿವರ್ಷದಂತೆ ಪುರಂದರ ದಾಸರ ಮತ್ತು ತ್ಯಾಗರಾಜರ ಆರಾಧನಾ ಮಹೋತ್ಸವ ಜನವರಿ 9 ಮತ್ತು 10 ರಂದು ನಡೆಯುತ್ತದೆ. ಈ ಎರಡು ದಿನವೂ [illegible] ಮತ್ತು [illegible] ಉದಯೋನ್ಮುಖ [illegible] ಖ್ಯಾತ [illegible] ಸಂಗೀತ ಕಾರ್ಯಕ್ರಮ [illegible] ಸಂಗೀತ ಪ್ರಿಯರಿಗೆ [illegible] ಈ ಬಾರಿ [illegible] ಹೋತ್ಸವ ನಡೆಯುತ್ತದೆ.

## ಚರ್ಚೆ, ಜನಪದ ಗೀತೆ ಮತ್ತು ಭಾವಗೀತೆ ಸ್ಪರ್ಧೆ

ನ. ರಾ. ಪುರ: ಇಲ್ಲಿನ ಸರ್ಕಾರಿ ಪದವಿ ಪೂರ್ವ ಕಾಲೇಜಿನ ವಿದ್ಯಾರ್ಥಿ ಸಂಘದ ಆಶ್ರಯದಲ್ಲಿ ಡಿ.20 ರಂದು ಅಂತರ ಪ್ರೌಢ ಶಾಲೆ/ಪದವಿಪೂರ್ವ ಕಾಲೇಜುಗಳ ಚರ್ಚಾ ಸ್ಪರ್ಧೆ, ಭಾವಗೀತೆ ಮತ್ತು ಜನಪದ ಗೀತೆ ಸ್ಪರ್ಧೆಗಳು ನಡೆದವು. ಶಿವಮೊಗ್ಗ ಮತ್ತು ಚಿಕ್ಕಮಗಳೂರು ಜಿಲ್ಲೆಗಳ ಸುಮಾರು 10 ಪ್ರೌಢಶಾಲೆ ಹಾಗೂ ಪದವಿಪೂರ್ವ ಕಾಲೇಜುಗಳು ಭಾಗವಹಿಸಿದ್ದವು.

ಡಿ. 21ರಂದು ನಡೆದ ವಿದ್ಯಾರ್ಥಿ ಸಂಘದ ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಇಲ್ಲಿನ ಕ್ಷೇತ್ರಾಭಿವೃದ್ಧಿ ಅಧಿಕಾರಿ ಚಿದಾನಂದ ಹೆಗ್ಗಾರ್ ವಹಿಸಿದ್ದರು. ಹಿರೇಮಗಳೂರು ಕಣ್ಣನ್ ಕಾಲೇಜಿನ ವಾರ್ಷಿಕ ಸಂಚಿಕೆ 'ಜ್ಯೋತಿ'ಯನ್ನು ಬಿಡುಗಡೆಗೊಳಿಸಿದರು. ಲೋಕೋಪಯೋಗಿ ಇಲಾಖೆಯ ಸಹಾಯಕ ಇಂಜನಿಯರ್ ಎಂ. ಹನುಮಂತಪ್ಪ ಬಹುಮಾನ ವಿತರಿಸಿದರು.

ನಂತರ ವಿದ್ಯಾರ್ಥಿ-ವಿದ್ಯಾರ್ಥಿನಿಯರಿಂದ ವಿವಿಧ ರೀತಿಯ ಮನರಂಜನೆಗಳ ಕಾರ್ಯಕ್ರಮ ನಡೆಯಿತು. ಕಾಲೇಜಿನ ಉಪನ್ಯಾಸಕಿ ಎಂ. ಗೀತಾ ನಿರ್ದೇಶಿಸಿದ 'ರಾಮಾಯಣ' ನೃತ್ಯ ರೂಪಕ ಪ್ರೇಕ್ಷಕರ ಮನ ಗೆಲ್ಲುವುದರಲ್ಲಿ ಯಶಸ್ವಿಯಾಯಿತು.

(ವರದಿ: ನವಿಲೂರು ಪ್ರಕಾಶ್.)

## 'ಪಶ್ಚಿಮ ಘಟ್ಟ ಉಳಿಸಿ' ಪಾದಯಾತ್ರೆ

(ಒಂದನೇ ಪುಟದಿಂದ)

ಮತ್ತು ರಾಜ್ಯ ಸರ್ಕಾರಗಳ ಜನಪದ ಪರವಾದ ಅರಣ್ಯ ಸಂರಕ್ಷಣಾ ಧೋರಣೆಗಳಿಗೆ ಪೂರಕವಾದ ಒಂದು ಚಳುವಳಿಯೇ ಹೊರತು ಸರ್ಕಾರದ ವಿರುದ್ಧದ ಹೋರಾಟವಲ್ಲ ಎಂದು ಒಂದು ಕರಪತ್ರದಲ್ಲಿ ಸ್ಪಷ್ಟಪಡಿಸಲಾಗಿದೆ.

ಆದರೆ ಕಾನೂನಿನ ಛಿದ್ರಗಳಿಂದ ತೂರಿ ಮರ ಕಡಿವ ಸಮಯ ಸಾಧಕ ಲಾಭಬಡುಕರನ್ನೂ, ವಿಧ ವಿಧವಾದ ಆಮಿಷಗಳಿಗೆ ಒಳಗಾಗಿ ಕರ್ತವ್ಯ ಚ್ಯುತರಾಗುವವರನ್ನೂ ಎಚ್ಚರಿಸಿ, ತಿದ್ದಿ ನಡೆಸುವ, ನಾಳಿನ ಪೀಳಿಗೆಯ ಏಳಿಗೆಯನ್ನು ಬಯಸುವ ಚಳುವಳಿ ಇದು ಎಂದೂ ಸ್ಪಷ್ಟನೆ ತಿಳಿಸಿದೆ.

**6 ವರ್ಷದ 'ಪಾದ ಯಾತ್ರಿ'**

ಈ ಪಾದಯಾತ್ರೆಯಲ್ಲಿ ಯುವಕರು ಮಾತ್ರವಲ್ಲ, ಮುಪ್ಪಿನ ಹತ್ತಿರ ಸಲ್ಲುತ್ತಿರುವವರು, ಮಹಿಳೆಯರು ಮುಂತಾದವರೂ ಇದ್ದಾರೆ. ಆದರೆ ಎಲ್ಲಕ್ಕಿಂತ ಪ್ರಮುಖ ಆಕರ್ಷಣೆ 6 ವರ್ಷದ ಬಾಲಕ ಗೌತಮ್. ಎಲ್ಲೂ ನಡಿಗೆ ತಪ್ಪದೆ, ವಾಹನವೇರಲೊಪ್ಪದೆ ಬರುತ್ತಿರುವ ಈತ ಗೋವದವರೆಗೂ ನಡೆಯುವ ಗುರಿ ಹೊಂದಿದ್ದಾನೆ.

**ಐತಿಹಾಸಿಕ**

ಹಲವಾರು ಹಳ್ಳಿಗಳವರ ಪಾಲಿಗೆ ಇದೊಂದು ಐತಿಹಾಸಿಕವಾದ, ಅತ್ಯಂತ ಪೂರ್ವ ಮಾದ ಸಂದರ್ಭ. ಇಡೀ ದೇಶದ ಆಗುಹೋಗುಗಳ ಬಗ್ಗೆ ನಡೆದ ಇಂಥ ದೊಡ್ಡ ಸಾಮೂಹಿಕ ಕ್ರಿಯೆಯಲ್ಲಿ ಅನಾಮಿಕವಾದ ತಮ್ಮ ಹಳ್ಳಿಯೂ ಪಾಲ್ಗೊಳ್ಳುವಂತಾದುದು ಅವರಿಗೆ ಹಿಡಿಸಲಾರದಷ್ಟು ಸಂಭ್ರಮ, ಧನ್ಯತೆ ತಂದುಕೊಟ್ಟಿದ್ದು ಕಂಡು ಬರುತ್ತಿತ್ತು. ಎಷ್ಟೋ ಕಡೆ ಇಂಥ ಹಲವರು ತಮ್ಮೆಲ್ಲ ಕೆಲಸ-ಕಾರ್ಯಗಳನ್ನು ಬದಿಗೊತ್ತಿ ನಾಲ್ಕಾರು ದಿನ ಪರ್ಯಂತ ಜಾಥಾದ ವ್ಯವಸ್ಥೆ, ಯಶಸ್ಸುಗಳಿಗಾಗಿ ಶ್ರಮಿಸುತ್ತಿದ್ದುದು ಕಂಡು ಬಂತು.

## ಸಂಕ್ಷಿಪ್ತ ಸುದ್ದಿಗಳು

**ಶೈಕ್ಷಣಿಕ ಪ್ರವಾಸ**

ಜೊಮ್ಲಾಪುರ: ಇಲ್ಲಿನ ಹಿರಿಯ ಪ್ರಾಥಮಿಕ ಶಾಲೆಯ ಮಕ್ಕಳು ಮುಖ್ಯೋಪಾಧ್ಯಾಯರ ಮತ್ತು ಸಹ ಶಿಕ್ಷಕಿಯವರೊಡನೆ ಡಿಸೆಂಬರ್ 24ರಂದು 1 ದಿನದ ಶೈಕ್ಷಣಿಕ ಪ್ರವಾಸ ಕೈಗೊಂಡಿದ್ದು, ಮಣಿಪಾಲ, ಉಡುಪಿ, ಮಲ್ಪೆ, ಆನೆಗುಡ್ಡೆ, ಕೊಲ್ಲೂರು ಯಾತ್ರಾಸ್ಥಳಗಳನ್ನು ಸಂದರ್ಶಿಸಿದರು.

**ಹೇರೂರು ಅಂಚೆ ಕಛೇರಿಗೆ ಫೋನ್ ಸೌಲಭ್ಯ**

ಹೇರೂರು (ಕೊಪ್ಪ ತಾಲ್ಲೂಕು): ಇಲ್ಲಿನ ಅಂಚೆ ಕಛೇರಿಯಲ್ಲಿ ಸಾರ್ವಜನಿಕ ಫೋನ್ ಸೌಲಭ್ಯ ಒದಗಿಸಲಾಗಿದೆ. ಫೋನ್ ನಂ. : 40 (ಹೇರೂರು)

**ಸರ್ವ ಸದಸ್ಯರ ಸಭೆ**

ಕೊಪ್ಪ: ಇಲ್ಲಿನ ಟೌನ್ ಗೃಹ ನಿರ್ಮಾಣ ಸಹಕಾರ ಸಂಘದ 1986-87ನೇ ಸಾಲಿನ ಸರ್ವ ಸದಸ್ಯರ ಸಭೆ ಡಿ. 26ರಂದು ಎಸ್.ಆರ್. ನಾರಾಯಣಭಟ್ಟರ ಅಧ್ಯಕ್ಷತೆಯಲ್ಲಿ ನಡೆಯಿತು. ಗೌ|| ಕಾರ್ಯದರ್ಶಿ ಎಚ್. ಶ್ರೀಶಶಿಕುಮಾರ್ ಸ್ವಾಗತಿಸಿದರು. ಬಿ.ವಿ. ಹನುಮಂತರಾವ್ ಭಾಷಣ ಮಾಡಿದರು. ಎ. ಅಚ್ಯುತರಾವ್ ವಂದಿಸಿದರು.



## ಓದುಗರ ಪತ್ರ

### ರಾಮಾಯಣ ನೃತ್ಯರೂಪಕ: ಮೆಚ್ಚಿಕೆಗೆ ಧನ್ಯವಾದ

ಮಾನ್ಯರೆ,

ನ. ರಾ. ಪುರದ ಕಿರಿಯ ಕಾಲೇಜಿನ ವಾರ್ಷಿಕೋತ್ಸವದಲ್ಲಿ ನಾನು ನಿರ್ದೇಶಿಸಿ ಪ್ರಸ್ತುತಪಡಿಸಿದ 'ಸಂಪೂರ್ಣ ರಾಮಾಯಣ' ನೃತ್ಯ ರೂಪಕವನ್ನು ಮೆಚ್ಚಿದ ಎಲ್ಲ ಕಲಾಭಿಮಾನಿಗಳಿಗೆ ಹಾಗೂ ಈ ಕಾರ್ಯಕ್ರಮಕ್ಕೆ ಅವಕಾಶ ಒದಗಿಸಿದ ಕಾಲೇಜಿನ ಪ್ರಿನ್ಸಿಪಾಲರು ಮತ್ತು ಸಹೋದ್ಯೋಗಿಗಳಿಗೆ ಹೃತ್ಪೂರ್ವಕ ಧನ್ಯವಾದಗಳನ್ನು ಈ ಮೂಲಕ ಸಲ್ಲಿಸಬಯಸುತ್ತೇನೆ (ಈ ವಿಚಾರ ಪ್ರಕಟಿಸಿದ 'ಮುಂಜಾವು' ಪತ್ರಿಕೆಗೂ ಕೂಡ.)

ಈ ರೂಪಕವನ್ನು ವಿದ್ಯಾರ್ಥಿ-ವಿದ್ಯಾರ್ಥಿನಿಯರಿಗೆ ತರಬೇತಿ ಮಾಡಿಸಿ ಸಹಕರಿಸಿದ ನನ್ನ ಸೋದರಿ ಹಾಗೂ ಸದರಿ ಕಾಲೇಜಿನ ಸಸ್ಯಶಾಸ್ತ್ರ ಉಪನ್ಯಾಸಕಿ ಕು| ಗೀತಾರಿಗೆ ಸಹ ಕಲಾಭಿಮಾನಿಗಳ ಮೆಚ್ಚಿಕೆಯಲ್ಲಿನ ಪಾಲು ಸಲ್ಲುತ್ತದೆ.

ಈ ರೂಪಕವನ್ನು ನ. ರಾ. ಪುರವಲ್ಲದೆ ಈಗ್ಗಾಗಲೇ ಭದ್ರಾವತಿ ಮತ್ತು ಕೊಪ್ಪದಲ್ಲಿ ಕೂಡ ಹಲವು ಬಾರಿ ಪ್ರದರ್ಶಿಸಿದ್ದೇನೆಂದು ತಿಳಿಸಲು ಸಂತೋಷ ಪಡುತ್ತೇನೆ.

(ಕೊನೆಯದಾಗಿ: ತಾ 27.12.87ರ ನಿಮ್ಮ ಪತ್ರಿಕೆಯಲ್ಲಿ ಈ ವಿಚಾರ ಪ್ರಕಟಿಸುವಾಗ ಸರಸ್ವತಿ ಎಂದು ಪ್ರಕಟವಾಗಿದೆ. ಅದು ಸಾವಿತ್ರಿ ಎಂದಿರಬೇಕು)

—ಶ್ರೀಮತಿ ಸಾವಿತ್ರಿ ಬಾಯಿ
ಸಹ ಶಿಕ್ಷಕಿ, ಸ|ಹಿ|ಪ್ರಾ| ಶಾಲೆ
ಕೇಸಪೇಟೆ, ಕೊಪ್ಪ

ನಂ ಸಿಆರ್‌ಸಿ ಸಿಆರ್. 43.87-88 ತಹಸೀಲ್ದಾರ್‌ರವರ ಕಾರ್ಯಾಲಯ, ಕೊಪ್ಪ ತಾ||, ದಿನಾಂಕ: 1-1-1988

## ಪ್ರಕಟಣೆ

ಈ ಮೂಲಕ ಸಾರ್ವಜನಿಕರ ಗಮನಕ್ಕೆ ತರುವುದೇನೆಂದರೆ, ಚಿಕ್ಕಮಗಳೂರು ಜಿಲ್ಲೆ, ಕೊಪ್ಪ ತಾಲ್ಲೂಕು, ತೆಗೂಡಿ ಗ್ರಾಮದ ವಾಸಿಯಾದ ಶ್ರೀ ಟಿ.ಎಸ್. ಕೊಲ್ಲಪ್ಪಗೌಡ ಬಿನ್ ಸುಬ್ಬೇಗೌಡ ಇವರು ತೆಗೂಡಿ ಗ್ರಾಮದ ಸ.ನಂ 72ರಲ್ಲಿ ತನ್ನ ಹೆಸರಿಗೆ 5-00 ಎಕ್ರೆ (ಐದು ಎಕ್ರೆ) ಜಮೀನು ಬಾಬ್ತು ಸಿಆರ್‌ಸಿ 7745:69-70ರ ಮೂಲ ಸಿಆರ್‌ಸಿ ಪತ್ರ ಪಡೆದಿರುತ್ತಾರೆ. ಸದರಿ ಕಾಫಿ ದೃಢೀಕರಣ ಪತ್ರವು ಕಳೆದುಹೋಗಿರುವುದರಿಂದ ಮೂಲ ಸಿಆರ್‌ಸಿ ನಕಲು ಕೇಳಿ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಮೇಲ್ಕಂಡ ಕಾಫಿ ನೋಂದಣಿ ದೃಢೀಕರಣ ಪತ್ರದ ನಕಲು ಕೊಡುವಲ್ಲಿ ಯಾರಿಂದಲಾದರೂ ತಕರಾರು ಇದ್ದಲ್ಲಿ ಈ ಪ್ರಕಟಣೆ ಹೊರಡಿಸಿದ ಹದಿನೈದು ದಿನಗಳ ಒಳಗೆ ಲಿಖಿತ ಮೂಲಕ ಈ ಕಾರ್ಯಾಲಯಕ್ಕೆ ತಿಳಿಸಲು ಕೋರಲಾಗಿದೆ.

(ಸಹಿ) ತಹಸೀಲ್ದಾರ್, ಕೊಪ್ಪ



ಸಂಪಾದಕ, ಮುದ್ರಕ ಮತ್ತು ಪ್ರಕಾಶಕ : [illegible], ಕೊಪ್ಪ